## ॥ ತೇಲಿಸೋ ಇಲ್ಲ ಮುಳುಗಿಸೋ ॥

ತೇಲಿಸೋ ಇಲ್ಲ ಮುಳುಗಿಸೋ ।
ನಿನ್ನ ಕಾಲಿಗೆ ಬಿದ್ದೆನೊ ಪರಮ ಕೃಪಾಳೋ ॥ ಪ ॥

ಸತಿಸುತ ಧನದಾಸೆ ಎಂದೆಂಬ ಮೋಹದಿ ।
ಹಿತದಿಂದ ಅತಿನೊಂದು ಬೆಂಡಾದೆನೊ ॥
ಗತಿ ಕೊಡುವರ ಕಾಣೆ ಮತಿಯ ಪಾಲಿಸೋ ಲಕ್ಷ್ಮೀ ।
ಪತಿ ನಿನ್ನ ಚರಣದ ಸ್ಮರಣೆಯಿತ್ತೆನಗೆ ॥ ೧ ॥

ಜರೆರೋಗ ದಾರಿದ್ರ್ಯ ಕಲ್ಮಶವೆಂಬ ।
ಶರಧಿಯೊಳಗೆ ಬಿದ್ದು ಮುಳುಗಿದೆನೋ ॥
ಸ್ಥಿರವಲ್ಲ ದೇಹವು ನೆರೆ ನಂಬಿದೆ ನಿನ್ನ ।
ಕರುಣಾಭಯವಿತ್ತು ಪಾಲಿಸೋ ಹರಿಯೇ ॥ ೨ ॥

ದೋಷವುಳ್ಳವ ನಾನು ಭಾಷೆಯುಳ್ಳವ ನೀನು ।
ಮೋಸ ಹೋದೆನೊ ಭಕ್ತಿರಸವ ಬಿಟ್ಟು ॥
ಶೇಷಶಯನ ಶ್ರೀಪುರಂದರ ವಿಠಲನೆ ।
ದಾಸರ ಸಂಗವಿತ್ತು ಪಾಲಿಸೊ ಹರಿಯೇ ॥ ೩ ॥